

# ಎಷ್ಟೊಂದು ದೂರ, ಫಿಲಿಪೆ?

ಫೆಲಿಪೆ ಮೆಕ್ಸಿಕೊದಲ್ಲಿ ಇರುತ್ತಿದ್ದನು. ಫಿಲೋಮಿನಾ ಈ ಕತ್ತೆ ಮರಿ ಆತನ ಗೆಳತಿ. ಫೆಲಿಪೆನ ಕುಟುಂಬದವರು ಕರ್ನಲ್ ಆಂಝಾನ ಆಶ್ವಾಸನೆಯಿಂದಾಗಿ ಕ್ಯಾಲಿಫೋರ್ನಿಯಾಕ್ಕೆ ಒಲಸೆ ಹೋಗಲು ನಿರ್ಧರಿಸುವರು. ಅವನ ದೊಡ್ಡಪ್ಪ, ಕಾರ್ಲೋಸ, ಈ ಕತ್ತೆ ಮರಿಯನ್ನು ಇಲ್ಲಿಯೇ ಬಿಟ್ಟು ಹೋಗುವ ಎಂದು ಹೇಳಿದನು. ಆದರೆ ಫೆಲಿಪೆ ಅದನ್ನು ಉಳಿದ ಕುದುರೆಗಳ ಜತೆ ಅಡಗಿಸಿಟ್ಟು ಆ ತಂಡವನ್ನು ಸೇರಿದನು. ಅವರ ಪ್ರವಾಸವು ಬಹು ದೂರದ್ದು ಅಲ್ಲದೆ ಸಂಕಟಗಳಿಂದ ತುಂಬಿದ್ದು. ಪ್ರವಾಸಿಗಳಿಗೆಲ್ಲ ಬಹಳ ತ್ರಾಸು ಪಡೆಯಬೇಕಾಯಿತು. ದಾರಿಯಲ್ಲಿ ಎಷ್ಟೋ ಪ್ರಾಣಿಗಳು ಸತ್ತವು. ಆದರೆ ಫೆಲಿಪೆಯ ಕುಟುಂಬವು ಸರಿಯಾಗಿ ಕ್ಯಾಲಿಫೋರ್ನಿಯಾ ಮುಟ್ಟಿತು. ಆಶ್ಚರ್ಯವೆಂದರೆ ಫಿಲೋಮಿನಾ ಕೂಡ ಫೆಲಿಪೆಯ ಜತೆ ಬಂದು ಮುಟ್ಟಿತು.

ಇದೊಂದು ಬಹು ಸಾಹಸದ ಇತಿಹಾಸ.1775ರ ಸುಮಾರಿಗೆ ಕರ್ನಲ್ ಜುಆನ್ ಬ್ಯಾಪ್ಟಿಸ್ಟಾ ದಿ ಆಂಝಾನ ಸಾಹಸದ ಕತೆ. ಜೆನೆವೀವ್ಹನ ಕತೆಗಾರಿಕೆ ಮತ್ತು ಯಾನ್ ಗ್ರೆಫಾಲ್ಕೊನಿಯ ಚಿತ್ರಗಳು ಈ ಇತಿಹಾಸವನ್ನು ಜೀವಂತಗೊಳಿಸುತ್ತವೆ.

# ಎಷ್ಟೊಂದು ದೂರ, ಫೆಲಿಪೆ?

- ಜೆನೆವಿವ್ವ ಗ್ರೈ



ಚಿತ್ರಃ ಯಾನ್ ಗ್ರೆಫಾಲ್ಕೊನಿ

ಅನುವಾದಃ ಪ್ರಭಾಕರ ನಾನಾವಟಿ

# ಅನುಕ್ರಮಣಿಕೆ



# 1. ಫೆಲಿಪೆ

ಫೆಲಿಪೆ ತನ್ನ ದೊಡ್ಡಪ್ಪ ಕಾರ್ಲೋಸ , ದೊಡ್ಡಮ್ಮ ಮಾರಿಯಾ ಮತ್ತು ಅವರ ಮಕ್ಕಳ ಜತೆ ಇರುತ್ತಿದ್ದನು. ಫೆಲಿಪೆನ ಗೆಳತಿ ಫಿಲೊಮೆನಾ. ಅದು ಒಂದು ಕತ್ತೆ ಮರಿ.



ಫಿಲೊಮಿನಾ ಸಾಕಷ್ಟು ಧ್ವನಿ ಮಾಡುತ್ತಿತ್ತು.
ಬಹಳೇ ಚಿಕ್ಕದ್ದಿದ್ದರಿಂದ ಹೊಲಗೆಲಸದಲ್ಲಿ ಅದು
ಸಹಾಯ ಮಾಡುತ್ತಿರಲಿಲ್ಲ.



ಕಾರ್ಲೋಸ ತನ್ನ ಹೊಲದಲ್ಲಿ ಗೋವಿನ ಜೋಳವನ್ನು ಬೆಳೆಸುತ್ತಿದ್ದನು.  ಆದರೆ ಹೊಲವು ಅಷ್ಟೊಂದು ಬೆಳೆ ಕೊಡುತ್ತಿರಲಿಲ್ಲ.

ಫೆಲಿಪೆ ಯಾವಾಗಲೂ ಅರೆಹೊಟ್ಟೆಯಲ್ಲಿಯೇ ಇರುತ್ತಿದ್ದನು. ಅವನ ಕಕ್ಕನ ಮಕ್ಕಳು ಕೂಡ. ಅಲ್ಲಿಯ ಜನರು ಕೂಡ. ಇಡೀ ಮೆಕ್ಸಿಕೊ ಊರೇ ಹಸಿವಿನಿಂದ ಬಳಲುತ್ತಿತ್ತು.



ಒಂದು ದಿನ ಫೆಲಿಪೆ ಮತ್ತು ಫಿಲೊಮಿನಾ ಊರಿನ ಮಧ್ಯದಲ್ಲಿ ಒಬ್ಬ ಅಧಿಕಾರಿಯನ್ನು ಕಂಡರು. ಆತನು ಸುತ್ತಮುತ್ತಲಿನ ಜನರ ಜತೆ ಮಾತಾಡುತ್ತಿದ್ದನು. “ನಾನು ಕರ್ನಲ್ ಆಂಝೂ," ಆತ ಹೇಳಿದನು.



“ಮೆಕ್ಸಿಕೊದ ವ್ಹಾಯಸರಾಯನಿಗೆ ಕ್ಯಾಲಿಫೋರ್ನಿಯದಲ್ಲಿ ವಾಸಿಸಲು ಮೂವತ್ತು ಕುಟುಂಬಗಳು ಬೇಕಾಗಿವೆ. ಅಲ್ಲಿಯ ಭೂಮಿ ಫಲವತ್ತಾಗಿರುವದು. ಹುಲುಸಾಗಿ ಬೆಳೆಯುವ ಹೊಲಮನೆ, ದನಕರುಗಳಿಗೆ ಮೇವು. ಇವುಗಳಿಗೆ ಬಹಳ ಅನುಕೂಲವಿರುವ ಭೂಮಿ.”

“ಪ್ರತಿ ಕುಟುಂಬಕ್ಕೆ ಅರಿವೆ, ಕುದುರೆ, ದನಕರುಗಳಿಗೆ ಹುಲ್ಲು ಮೇವು. ಎಲ್ಲವು ಪುಕ್ಕಟೆ. ಕುದುರೆ ಮೇಲೆ ಕುಳಿತು ಹೋದರೆ ಕ್ಯಾಲಿಫೋರ್ನಿಯಾ ಮುಟ್ಟಲು ನಾಲ್ಕು ತಿಂಗಳು ಹಿಡಿಯುವದು. ನನ್ನ ಸೈನಿಕರು ಮತ್ತು ನಾನು ನಿಮ್ಮನ್ನು ಅಲ್ಲಿಗೆ ಕರೆದುಕೊಂಡು ಹೋಗುವೆವು. ಯಾರು ಬರುತ್ತೀರಿ?”



“ಹೊಟ್ಟೆತುಂಬ ಊಟ? ಮೈತುಂಬ ಬಟ್ಟೆ?”
ಫೆಲಿಪೆ ಫಿಲೋಮಿನಾದ ಕಿವಿಯಲ್ಲಿ
ಪಿಸುಗುಟ್ಟಿದನು. ಆ ಮೇಲೆ ದೊಡ್ಡ ದನಿಯಲ್ಲಿ
“ನಾನು ಬರುವೆ!" ಎಂದು ಕೂಗಿ ಹೇಳಿದನು.





“ಆ ಕತ್ತೆಯನ್ನು ಇಲ್ಲಿಂದ ದೂರ ಸಾಗಿಸಿ !”
ಕರ್ನಲ್ ಸಿಟ್ಟಿನಿಂದ ಜಬರಿಸಿದನು.



ಉಳಿದವರು ಕೂಡ ದೊಡ್ಡ ದನಿಯಲ್ಲಿ ಹೇಳಿದರು,

“ನಾವು ಕೂಡ ಕ್ಯಾಲಿಫೋರ್ನಿಯಾಕ್ಕೆ ಬರುತ್ತೇವೆ!“



ಫಿಲೊಮಿನಾ ತನ್ನ ದನಿ ತೆಗೆದು

“ಢೆಂಚೂ -ಢೆSSSSS - ಚೂ SSSSS !” ಎಂದು ಜೋರಾಗಿ

ಒದರಿತು. ಅದರ ದನಿ ಕೇಳಿ ಕುದುರೆಗಳು ಅಂಜಿ ಹಿಂದೆ ಸರಿದವು.

ಹಂದಿಗಳು ಚೀತ್ಕಾರವಿಟ್ಟವು.



ಫೆಲಿಪೆ ತನ್ನ ದೊಡ್ಡಪ್ಪನ ಮನೆಗೆ ಓಡುತ್ತ ಹೋಗಿ ಹೇಳಿದನು.

“ಕ್ಯಾಲಿಫೋರ್ನಿಯಾ ಬಹಳ ದೂರವಿದೆ.” ದೊಡ್ಡಪ್ಪನ ಉತ್ತರ.

“ಅದಕ್ಕೇಕೆ ಹೆದರಬೇಕು?”   ದೊಡ್ಡಮ್ಮ ಹೇಳಿದಳು.

“ಇಲ್ಲಿ  ನಾವು  ಕೀಟಕಗಳಂತೆ ಜೀವಿಸುತ್ತಿದ್ದೇವೆ.

ನಮಗೆ ಊಟ, ಅರಿವೆಗಳು ಬೇಕು. “



ಅವರೆಲ್ಲ ಅಧಿಕಾರಿಯ ಹತ್ತಿರ ಹೋಗಿ ಒಪ್ಪಿಗೆ ಕೊಟ್ಟರು. "ನಾನು ಫಿಲೋಮಿನಾಳನ್ನು ಒಯ್ಯುವೆ."

"ಇಲ್ಲ." ದೊಡ್ಡಪ್ಪ ಹೇಳಿದ, "ಅದು ಇನ್ನು ಚಿಕ್ಕ ಮರಿ."



“ಅದು ಎಂದು ದೊಡ್ಡದಾಗುತ್ತದೆ?” ಫೆಲಿಪೆ ಕೇಳಿದನು.

“ನಿನ್ನ ಹೆಗಲು ಮುಟ್ಟುವಷ್ಟು ಎತ್ತರವಾಗಿ ಬೆಳೆದಾಗ “ ದೊಡ್ಡಪ್ಪ ಹೇಳಿದ.

“ನಾವು ಅಷ್ಟರಲ್ಲಿ ಕ್ಯಾಲಿಫೋರ್ನಿಯಾ ಮುಟ್ಟುತ್ತೇವೆ..”

“ಢೆಂಚೂ -ಢೆSSSSS - ಚೂ SSSSS !”

ಫಿಲೋಮಿನಾ ತನ್ನ ದನಿ ತೆಗೆಯಿತು.

ಫೆಲಿಪೆಗೆ ಮಾತ್ರ ಅದರ ಆನಂದ ತಿಳಿಯಿತು.

ಫಿಲೋಮಿನಾ ಕೂಡ ಕ್ಯಾಲಿಫೋರ್ನಿಯಾಕ್ಕೆ

ಬರುತ್ತದೆ.





“ನಮಗೆ ಮರುಭೂಮಿ ಮತ್ತು ಪರ್ವತಗಳನ್ನು ಪಾರು ಮಾಡಬೇಕಾಗುವದು.”

ಕರ್ನಲ್ ಆಂಝೂ ಹೇಳಿದನು.

“ದಾರಿಯಲ್ಲಿ ನಮಗೆ ಪರಿಚಿತವಿರುವ ರೆಡ್ ಇಂಡಿಯನ್ಸ ಭೆಟ್ಟಿಯಾಗಬಹುದು. ಅಲ್ಲದೆ ನಮ್ಮ ಮೇಲೆ ದಾಳಿ ಮಾಡುವ ರೆಡ್ ಇಂಡಿಯನ್ಸ ಕೂಡ ಇರಬಹುದು. ಇದೊಂದು ಬಹು ಕಷ್ಟದ ಪ್ರವಾಸ.”



## 2. ಪ್ರವಾಸ

ಕೊನೆಗೆ ಎಲ್ಲ ಸಿದ್ಧತೆಗಳನ್ನು ಮಾಡಿಯಾಯಿತು.

ಕರ್ನಲ್ ಆಂಝೂ ತಂಡದ ಮುಂದೆ ಇದ್ದನು.

ಅವನ ಹಿಂದೆ ಕುದುರೆಗಳ ಮೇಲೆ ಕುಳಿತ ಸೈನಿಕರಿದ್ದರು.

ಆ ಮೇಲೆ ಕುಟುಂಬಗಳು.

ಅದಾದ ಮೇಲೆ ಇನ್ನಷ್ಟು ಸೈನಿಕರು.

ಕೊನೆಯಲ್ಲಿ ದನಕರುಗಳು. ಕೊನೆಯಲ್ಲಿ ಫಿಲೋಮಿನಾ.

ಫೆಲಿಪೆ ಕುದುರೆಯ ಮೇಲೆ ಕುಳಿತಿದ್ದನು.

ಆತನ ದೊಡ್ಡಪ್ಪನ ಮಕ್ಕಳು, ಜೋಸ ಮತ್ತು ರುಬೆನ ಕೂಡ ಕುದುರೆಯ ಮೇಲೆ ಕುಳಿತಿದ್ದರು. ಫೆಲಿಪೆ ಫಿಲೋಮಿನಾ ಕಡೆಗೆ ನೋಡುತ್ತಿದ್ದನು.





ಅಷ್ಟರಲ್ಲಿ ಆತನಿಗೆ ಅವನನ್ನು ಕರೆದ  ದನಿ ಕೇಳಿಸಿತು.

"ಢೆಂಚೂ -ಢೆSSSSS - ಚೂ SSSSS !"

ಕುದುರೆಯು ತನ್ನ ಲಗಾಮನ್ನು ಸರಿಪಡಿಸಿಕೊಂಡಿತು.

ಕುದುರೆಗಳು ತಮ್ಮ ಬೆನ್ನಿನ ಮೇಲಿನ ಭಾರವನ್ನು

ಸಡಿಲುಪಡಿಸಿಕೊಂಡವು.

ದನಕರುಗಳೆಲ್ಲ ಗಿಡಗಂಟಿಗಳ ಕಡೆಗೆ ಓಡಿದವು.



ಪೂರ್ಣ ತಂಡವು ನಿಂತು ಬಿಟ್ಟಿತು.  ಕರ್ನಲ್ ಆಂಝೂ

"ಆ ಕತ್ತೆ ಮರಿಯನ್ನು ದೂರ ಬಿಟ್ಟು ಬಾ!" ಎಂದು ಒದರಿದನು.

ಯಾರಿಗೂ ಅವನ ಅಪ್ಪಣೆ ಕೇಳಿಸಲಿಲ್ಲ.

ಎಲ್ಲ ಸೈನಿಕರು ತಮ್ಮ ತಮ್ಮ ಕುದುರೆಗಳನ್ನು

ಹಿಡಿದಿಡುವದರಲ್ಲಿ ನಿರತರಾಗಿದ್ದರು.



ಆ ದಿನದ ಮಧ್ಯಾನ್ಹದಲ್ಲಿ  ಒಂದು ಹೊಳೆಯ ದಂಡೆಯಲ್ಲಿ ಕರ್ನಲ್ ಆಂಯ್ಯೂ ತಂಡವನ್ನು ತಡೆ ಹಿಡಿದನು.

"ಇಲ್ಲಿಯೇ ನಾವು ರಾತ್ರಿ ಕಳೆಯುವ."

ಆತ ಹೇಳಿದನು.



ಎಲ್ಲರು ಕುದುರೆಗಳ ಮೇಲಿನ ಭಾರವನ್ನು ಕೆಳಗಿಳಿಸಿದರು.

ಅಲ್ಲಲ್ಲಿ ಡೇರೆಗಳನ್ನು ಕಟ್ಟಿದರು.

ಮಹಿಳೆಯರು ಒಲೆ ಹೊತ್ತಿಸಿ ಸಂಜೆಯೂಟವನ್ನು ತಯಾರಿಸಿದರು.

ಮಕ್ಕಳೆಲ್ಲ ಆಟವಾಡತೊಡಗಿದರು.



ಫಿಲೋಮಿನಾ ಇತರ ಕುದುರೆಗಳ ಹಾಗೆ ಹುಲ್ಲನ್ನು

ತಿನ್ನುತ್ತಿರುವದನ್ನು ಫೆಲಿಪೆ ಕಂಡನು.

“ನಾನು ನಿನ್ನನ್ನು ಪ್ರೀತಿಸುತ್ತೇನೆ.”

ಎಂದು ಅದರ ಕಿವಿಯಲ್ಲಿ ಹೇಳಿದನು.

ಫಿಲೋಮಿನಾ ಅವನ ಎದೆಯನ್ನು ಅಪ್ಪಿಗೊಂಡಿತು



ಮರುದಿನ ಮುಂಜಾನೆ ಸೈನಿಕನು ಎಲ್ಲರನ್ನು ಎಚ್ಚರ

ಗೊಳಿಸಲು ಕಹಳೆಯನ್ನು ಊದಿದನು.

ಫಿಲೋಮಿನಾ ತನ್ನ ಹಾಡನ್ನು ಹಾಡಿತು.

“ಢೆಂಚೂ -ಢೆSSSSS - ಚೂ SSSSS !”

ಎಲ್ಲರು ಅವಸರ ಮಾಡತೊಡಗಿದರು.

ಕರ್ನಲ ಆಂಝೂ ಮುಗುಳು ನಗೆ ನಕ್ಕನು.

“ಕತ್ತೆ ಮರಿ ಚೆನ್ನಾಗಿದೆ.” ಎಂದು ಹೊಗಳಿದನು.

ಆ ಮೇಲೆ ಫಿಲೋಮಿನಾದ ದನಿ ಕೇಳಿದಾಗ

ಮುಂಜಾವು ಆಯಿತೆಂದು ತಿಳಿಯಲಾಯಿತು.

ಫೆಲಿಪೆಗೆ ಇದು ಹೆಮ್ಮೆಯ ವಿಷಯ.

ಕಾರ್ಲೋಸಗೂ ಕೂಡ

ಸ್ವಲ್ಪ ಖುಷಿಯಾದಂತೆ  ಕಂಡಿತು.



ಕೆಲ ದಿನಗಳ ನಂತರ ಪರ್ವತಗಳನ್ನು

ದಾಟಬೇಕಾಯಿತು.

ಎಲ್ಲ ಕಡೆಗೂ ದೊಡ್ಡ ದೊಡ್ಡ ಕಲ್ಲು ಬಂಡೆಗಳು.

ಕರ್ನಲನಿಗೆ ರೆಡ್ ಇಂಡಿಯನರು ದಾಳಿ

ಮಾಡಬಹುದೆಂಬ ಅಂಜಿಕೆ.





“ಅಪಾಚೆ ಬೇಹುಗಾರರು ಬಂಡೆಗಳ ಹಿಂದೆ ಕುಳಿತು ನೋಡುತ್ತಿರಬಹುದು.” ಆತ ಹೇಳಿದ. ಅವರು ಇಕ್ಕಟ್ಟಾದ ಖಿಂಡಿಯನ್ನು ದಾಟತೊಡಗಿದರು. ಅವರು ಕಣಿವೆಯ ದಂಟೆಗುಂಟ ನಡೆದು ಹೋದರು. ಕೆಲ ಸಲ ಗಿಡಗಂಟಿಗಳ ಸಂದಿನಿಂದ ಹೋದರು. ಒಂದು ದಿನ ಅವರು ಮಲಗಿದ್ದರು. ಫೆಲಿಪೆಗೆ ಯಾರನ್ನೋ ನೋಡಿದಂತೆ ಅನ್ನಿಸಿತು. ಐದಾರು ಅಪಾಚೆಗಳು. ಆದರೆ ಅದು ಕೇವಲ ನೆರಳು.

ತಂಡವು ಮುಂಜಾನೆಯವರೆಗೆ ನಡೆಯುತ್ತಿತ್ತು. ಯಾರೂ ಏನನ್ನು ತಿಂದಿರಲಿಲ್ಲ. "ಮಧ್ಯಾನ್ಹದವರೆಗೆ ನಾವು ಸುರಕ್ಷಿತ ಮುಟ್ಟಬಹುದು." ಕರ್ನಲ ಆಂಯ್ಝೊ ಹೇಳಿದನು. "ಅಲ್ಲಿ ನಾವು ಊಟ ಮಾಡಬಹುದು. ಕ್ಯಾಲಿಫೋರ್ನಿಯಾ ಚೆನ್ನಾಗಿ ಇರಬಹುದು." ದೊಡ್ಡಮ್ಮ ಗುಣುಗಿದಳು. "ಅಲ್ಲಿ ಮುಟ್ಟಿದರೆ ಸಾಕು." ದೊಡ್ಡಪ್ಪ ಕಾರ್ಲೋಸನ ಉತ್ತರ.





## 3. ರೆಡ್ ಇಂಡಿಯನರ ಪ್ರದೇಶ

ಅವರೀಗ ಮರುಭೂಮಿನ್ನು ಮುಟ್ಟಿದರು. ಎಷ್ಟೋ ದಿನ ಈ ಮರುಭೂಮಿಯಲ್ಲಿ  ಅವರು ಪ್ರವಾಸ ಮಾಡಿದರು. ಮೈಲುಗಟ್ಟಲೆ ಮರುಭೂಮಿಯನ್ನು ತುಳಿಯುತ್ತ ನಡೆದರು.



“ನಾವು ಬೇಸಿಗೆ ಕಾಲದಲ್ಲಿ ಮನೆ ಬಿಟ್ಟೆವು.” ಫೆಲಿಪೆ ಹೇಳತೊಡಗಿದನು.

“ಈಗ ಚಳಿಗಾಲ. ಇನ್ನು ಕ್ಯಾಲಿಫೋರ್ನಿಯಾ ಕಾಣುತ್ತಿಲ್ಲ.” “ನಾವೀಗ ಅರ್ಧ ದಾರಿ ಬಂದಿದ್ದೇವೆ.” ಕರ್ನಲ್ ಆಂಝಾ ಹೇಳಿದನು.



"ಸ್ಯಾನ ಗೇಬ್ರಿಯಲ್ ಮುಟ್ಟಲು ಎರಡು ತಿಂಗಳು ಹಿಡಿಯಬಹುದು.." ಎಲ್ಲರಿಗೂ ಸಾಕಷ್ಟು ದಣಿವು. ಇಂತಹ ವಿಚಾರ ಕೂಡ ಮಾಡಲಾರರು. "ಎರಡು ತಿಂಗಳು,ಎರಡು ವರುಷ ಎಲ್ಲವು ಅವರಿಗೆ ಒಂದೇ." ಮಾರಿಯಾ ದೊಡ್ಡಮ್ಮ ಹೇಳಿದಳು.



ಅವರೀಗ ಒಂದು ನದಿಯ ದಂಡೆಗೆ ಬಂದರು. ಅಲ್ಲಿ ಇಂಡಿಯನ್ಸ ಇರುತ್ತಿದ್ದರು.

"ಇವರು ಪಿಮಾ ಇಂಡಿಯನ್ಸ."

ಕರ್ನಲ್ ಆಂಝಾ ಹೇಳಿದನು.

ಅವರು ಒಳ್ಳೆಯ ಜನರು.

ಇವರಿಗಾಗಿ ಅವರು ಊಟ ತಂದಿದ್ದರು.



ಮಾರಿಯಾ ದೊಡ್ಡಮ್ಮ ಅವರಿಗೆ ಕುಡಿಯಲು
ಚಾಕಲೇಟು ಕೊಟ್ಟಾಗ
ಅವರು ಕಹಿಮಾರಿ ಮಾಡಿ ಉಗುಳಿ ಬಿಟ್ಟರು.
“ಅಪಾಚೆ ಒಳ್ಳೆಯ ಜನರು!”
ದೊಡ್ಡಮ್ಮ ಹೇಳಿದಳು.



ಈ ತಂಡ ಮೂರು ದಿನ ಅಲ್ಲಿಯೇ ಉಳಿಯಿತು.
ಫೆಲಿಪೆ ನೀರು ತುಂಬಲು ನೆರವಾದನು ಮತ್ತು
ದನಕರುಗಳಿಗೆ ಸಹಾಯ ಮಾಡಿದನು.



ಕಾರ್ಲೋಸಗೆ ಅಚ್ಚರಿಯಾಯಿತು. “ಈಗ ಫೆಲಿಪೆ ದನ ಕಾಯುವವನಾಗಿದ್ದಾನೆ.” ಕಾರ್ಲೋಸ ಮಾರಿಯಾಗೆ ಹೇಳಿದನು. “ಇನ್ನು ಮುಂದೆ ಮತ್ತೇನಾಗುವವನಿದ್ದಾನೆ. ನೋಡಬೇಕು.”

ಒಂದು ದಿನ ಇಂಡಿಯನ್ಸ ಎಲ್ಲರಿಗೂ ಹಬ್ಬದ ಸಿಹಿ ಊಟವನ್ನು ಕೊಟ್ಟರು. ಫೆಲಿಪೆ ಹೊಟ್ಟೆತುಂಬ ಊಟ ಮಾಡಿದನು. ಅಲ್ಲಿಯ ಒಬ್ಬ ಇಂಡಿಯನ್ ಕಲ್ಲಂಗಡಿ ಹಣ್ಣನ್ನು ಕೊಯ್ಯಲು ಸಹಾಯ ಮಾಡಿದನು. ಕೆಲ ತುಂಡುಗಳನ್ನು ಫಿಲೋಮಿನಾಗೆ ತಿನ್ನಲು ಕೊಡಲಾಯಿತು. ಅದಕ್ಕೆ ಹಣ್ಣು ಸೇರಲಿಲ್ಲ. ಫೆಲಿಪೆ ಅದನ್ನು ತಿಂದನು.





## 4. ಮರುಭೂಮಿ

ತಂಡವು ಮರುಭೂಮಿಯಲ್ಲಿ ಪ್ರವಾಸ ಮಾಡತೊಡಗಿತು.

ಚಳಿಗಾಳಿ ಬೀಸುತ್ತಿತ್ತು. ಉಸುಕು ಹಾರುತ್ತಿತ್ತು.

ಕುಡಿಯಲು ನೀರು ಇರಲಿಲ್ಲ.

ದನಗಳಿಗೆ ತಿನ್ನಲು ಹುಲ್ಲು ಇರಲಿಲ್ಲ.

ಫಿಲೋಮಿನಾಗೆ ತಿನ್ನಲು ಒಂದಿಷ್ಟು ಎಲೆಗಳು ದೊರೆತವು.



ಮೈಕೊರೆಯುವ ಚಳಿಯಲ್ಲಿ ತಮ್ಮ ಶರೀರವನ್ನು ಬೆಚ್ಚಗಿಡಲು
ಫೆಲಿಪೆ ಮತ್ತು ಫಿಲೋಮಿನಾ ಅಪ್ಪಿಕೊಂಡು ಮಲಗುತ್ತಿದ್ದರು.
ಉಳಿದ ಪ್ರಾಣಿಗಳೆಲ್ಲ ನಿಂತು ತೂಕಡಿಸುತ್ತಿದ್ದವು.
ಚಳಿ ಮತ್ತು ಹಸಿವಿನಿಂದ ಬಳಲುತ್ತಿದ್ದವು.
ಅವುಗಳ ಬೆನ್ನಿನ ಮೇಲೆ ಚಳಿಗಾಳಿ ಬೀಸುತ್ತಿತ್ತು.



ಒಂದು ದಿನ ಒಂಬತ್ತು ಕುದುರೆಗಳು ಸತ್ತು ಹೋದದ್ದನ್ನು ಫೆಲಿಪೆ ನೋಡಿದನು.

"ತಿನ್ನಲು ಏನೂ ಇಲ್ಲ, ಕುಡಿಯಲು ನೀರಿಲ್ಲ. ನಾವು ಇನ್ನು ಜೀವಂತವಿದ್ದದ್ದೇ ಸೋಜಿಗದ ಮಾತು."

ಕರ್ನಲ್ ಆಂಝೂ ದುಃಖದಿಂದ ಹೇಳುತ್ತಿದ್ದನು.



“ದನಕರುಗಳು ಸತ್ತು ಹೋದರೆ ಮನುಷ್ಯರು ಕೂಡ ಸಾಯಬಹುದು.” ಕಾರ್ಲೋಸ ನುಡಿದನು.



ಫೆಲಿಪೆ ದಣಿದ ಕುದುರೆಗಳ ಸುತ್ತ ನಡೆಯುತ್ತಿದ್ದನು.
ಚಳಿಗಾಳಿ ಬೀಸುತ್ತಲೇ ಇತ್ತು. ಪ್ರಾಣಿಗಳಿಗೆ ತಿನ್ನಲು
ಏನೂ ಸಿಗುತ್ತಿರಲಿಲ್ಲ. ಹೀಗಾಗಿ ಅವು
ಸಾಯತೊಡಗಿದವು.



ಆ ರಾತ್ರಿ ಕಾರ್ಲೋಸ ದೊಡ್ಡಪ್ಪ,

“ನಾವು ಈ ಬತ್ತಿ ಹೋದ  ನದಿಯಲ್ಲಿ ತೆಗ್ಗನ್ನು ಹಡ್ಡುವ.

ದನಕರುಗಳಿಗೆ ಕುಡಿಯಲು ನೀರು ದೊರೆಯಬಹುದು.”

ಎಂದು ಹೇಳಿದನು.



ಫೆಲಿಪೆ “ನಾನು ಇಂದು ರಾತ್ರಿ ಉಳಿದವರ ಜತೆ ಕೆಲಸ ಮಾಡುತ್ತೇನೆ. ನೀನು ಬೆಚ್ಚಗಿರು.” ಎಂದು ಫಿಲೋಮಿನಾಳಿಗೆ ಹೇಳಿದನು. ಆತ ತನ್ನ ದೊಡ್ಡಪ್ಪನ ಮಕ್ಕಳಿಗೆ “ಫಿಲೋಮಿನಾ ಜತೆಗೆ ಯಾರು ಮಲಗುವಿರಿ” ಎಂದು ಕೇಳಿದನು. “ನಾನು! ನಾನು!” ಎಂದು ಎಲ್ಲರು ಮುಂದಾದರು.

ಫೆಲಿಪೆ ಇಡೀ ರಾತ್ರಿ ಕೆಲಸ ಮಾಡುತ್ತಿದ್ದನು. ನೀರಿಗಾಗಿ ತೆಗ್ಗನ್ನು ಹಡ್ಡುತ್ತಿದ್ದನು. ದನ ಕರುಗಳಿಗೆ ನೀರನ್ನು ಹನಿಸತೊಡಗಿದನು. ತನಗೂ ನೀರಡಿಕೆಯಾಗಿದೆ ಎಂಬುದನ್ನು ಆತ ಮರೆತಿದ್ದನು.

ಕೊನೆಗೆ ಬೆಳಗಾಯಿತು.

ಅಷ್ಟರಲ್ಲಿ 96 ಪ್ರಾಣಿಗಳು ಸತ್ತು ಹೋಗಿದ್ದವು. ಆದರೆ ತಂಡಕ್ಕೆ ಮುಂದೆ ಹೋಗಬೇಕಾಗಿತ್ತು.



## 5. ಸಂಕಟಗಳು

ಫೆಲಿಪೆ ಏನೋ ವಿಚಿತ್ರ ದೃಶ್ಯವನ್ನು ನೋಡಿದನು. “ಇದೇನು ಬಿಳಿ ಬಣ್ಣದ್ದು?” ಎಂದು ಕೇಳಿದನು. “ಹಿಮ ಮಳೆ” ಕರ್ನಲ್ ಆಂಝೂ ಹೇಳಿದನು. “ನೀನು ಮೊದಲಿದ್ದ ಮೆಕ್ಸಿಕೋದಲ್ಲಿ ಹಿಮ ಬೀಳುವದನ್ನು ನೋಡಿರಲಿಕ್ಕಿಲ್ಲ.” ಅಂದು ರಾತ್ರಿ ಅವರೆಲ್ಲರು ಬೆಂಕಿಯನ್ನು ಹೊತ್ತಿಸಿ ಅದರ ಸುತ್ತಲು ಕುಳಿತರು. ಆದರೂ ಚಳಿ ಹೋಗಲಿಲ್ಲ.





ಮರು ದಿನ ಮುಗಿಲು ನಿರಭ್ರವಾಗಿತ್ತು.

ಫೆಲಿಪೆ ದೂರದಲ್ಲಿ ಕಾಣುವ ಪರ್ವತಗಳನ್ನು ಗುರುತಿಸಿದನು. ಎಲ್ಲ ಕಡೆಗೂ ಬಿಳಿ ಬಣ್ಣ.

"ಕ್ಯಾಲಿಫೋರ್ನಿಯಾ ಬರಿ ಬರ್ಫಮಯ ಮತ್ತು ಹಿಮಗಳಿರುವ ಪ್ರದೇಶ."

ಕಾರ್ಲೋಸ ದೊಡ್ಡಪ್ಪ ಹೇಳಿದನು.

"ನಾವು ಮೊದಲಿದ್ದಲ್ಲಿ ಬಡವರಾಗಿ ಇದ್ದೆವು. ಇಲ್ಲಿ ಒಂದಿಷ್ಟಾದರೂ ಬೆಚ್ಚಗಿದ್ದೇವೆ."

" ಮತ್ತೇ ತಿರುಗಿ ಹೋಗೋಣವೇ?" ಮಾರಿಯಾ ಕೇಳಿದಳು.



ಸೂರ್ಯನ ಬಿಸಿಲು ಫೆಲಿಪೆಯ ಹೆಗಲುಗಳನ್ನು ಬೆಚ್ಚಗೆ ಇಡುತ್ತಿತ್ತು. ರುಬೆನ "ನೋಡಲ್ಲಿ, ಹಿಮ ಕರಗುತ್ತಲಿದೆ."

"ಢೆಂಚೂ -ಢೆSSSSS - ಚೂ SSSSS !" ಫಿಲೋಮಿನಾದ ಧ್ವನಿ.

ಪರ್ವತಗಳು ಎದುರಿಗೆ ಕಾಣುತ್ತಿದ್ದವು. ಬುಗ್ಗೆಯಂತೆ ಹಾರುವ ನೀರಿನ,  ಅಲ್ಲಿ ಬೆಳೆದಿದ್ದ ಹಸಿರು ಹುಲ್ಲಿನ ವಾಸನೆ ಬಂದಿರಬಹುದು.

ಕುದುರೆಗಳು ರಭಸದಿಂದ ನಡೆಯತೊಡಗಿದವು.



ಆ ಮಧ್ಯಾಹ್ನ ಅವರೆಲ್ಲರು ಪರ್ವತದ ಕೆಳಬದಿಗೆ ಬಂದು ಮುಟ್ಟಿದರು. ಅಲ್ಲಿ ಎಲ್ಲರಿಗೂ ಸಾಕಾಗುವಷ್ಟು  ನೀರೇ ನೀರು. ಪ್ರಾಣಿಗಳಿಗೆ ಸಾಕಷ್ಟು ಹುಲ್ಲು. “ನಾವು ಬಂದು ಮುಟ್ಟಿದೆವು.” ಫೆಲಿಪೆ ಕೂಗಿ ಹೇಳಿದನು.



ಫೆಲಿಪೆ ದಣಿವಿನಿಂದ ಬಳಲುತ್ತಿರುವ  ಕುದುರೆಗಳ ಮೇಲಿನ ಭಾರವನ್ನು ಕೆಳಗೆ ಇಳಿಸಲು ಮತ್ತು ಹುಲ್ಲು ತಿನ್ನಿಸಲು ಸಹಾಯ ಮಾಡತೊಡಗಿದನು.

“ಇದೊಂದು ಬಹಳ ಕಠಿಣವಾದ ಪ್ರವಾಸ. ಇನ್ನುಳಿದ ಪ್ರವಾಸ ಸುಲಭ.” ಕರ್ನಲ್ ಆಂಝೂ  ಹೇಳಿದನು.

“ದೇವರ ದಯೆ!” ಮಾರಿಯಾ ನಿಟ್ಟುಸಿರು ಬಿಟ್ಟು ಹೇಳಿದಳು.



## 6. ಕ್ಯಾಲಿಫೋರ್ನಿಯಾ

ಅವರು ಒಂದು ವಾರ ವಿಶ್ರಾಂತಿ ತೆಗೆದುಕೊಂಡರು.

ಆ ಮೇಲೆ ಅವರು ಪರ್ವತ ಹತ್ತಿದರು.

ಎಲ್ಲ ಕಡೆಗೂ ಎತ್ತರವಾಗಿ ಬೆಳೆದಿರುವ ಗಿಡಗಳು ಮತ್ತು ಹಸಿರು ಹುಲ್ಲು.

ಫೆಲಿಪೆಗೆ ದ್ರಾಕ್ಷೆಯ ಬಳ್ಳಿ ಮತ್ತು ಸೂರ್ಯಕಾಂತಿ ಹೂಗಳು ಕಂಡವು. ಸೂರ್ಯನು ಹೊಳೆಯುತ್ತಿದ್ದನು ಮತ್ತು ಹೊಳೆಗಳೆಲ್ಲ ಹರಿಯುತ್ತಿದ್ದವು. ನದಿಗಳಲ್ಲಿ ಸಾಕಷ್ಟು ಮೀನುಗಳು.



“ಆದರೆ ಕ್ಯಾಲಿಫೋರ್ನಿಯಾ ಎಲ್ಲಿದೆ?” ಫೆಲಿಪೆ ಕೇಳಿದನು.

“ಇದೇ ಕ್ಯಾಲಿಫೋರ್ನಯಾ!”

ಕರ್ನಲ್ ಆಂಝೂ ಉತ್ತರಿಸಿದನು. “ನಾವೀಗ ಸ್ಯಾನ ಗೇಬ್ರಿಯಲ್ ಹತ್ತಿರ ಬಂದಿದ್ದೇವೆ.”



“ಫಿಲೋಮಿನಾಕಡೆ ನೋಡಲ್ಲಿ!” ರುಬೆನ ಒದರಿ ಹೇಳಿದನು.

“ಅದು ಎಷ್ಟು ದೊಡ್ಡದಾಗಿದೆ.”

“ಫೆಲಿಪೆಯ ಹೆಗಲು ಮುಟ್ಟುವಷ್ಟು ಎತ್ತರವಾಗಿದೆ.”

ಮಾರಿಯಾ ಹೇಳಿದಳು.



“ಥೆಂಚೂ -ಥೆSSSSS - ಚೂ SSSSS !”

ಫಿಲೋಮಿನಾ ತನ್ನ ದನಿಯಲ್ಲಿ ಹೆಮ್ಮೆಯಿಂದ ಒದರಿತು.

ಫೆಲಿಪೆಗೆ ಬೆನ್ನಿನ ಮೇಲೆ ಕೂಡಲು ಅಡ್ಡಿ ಮಾಡಲಿಲ್ಲ. ಅದರ ಸ್ನಾಯುಗಳು ಗಟ್ಟಿಯಾಗಿದ್ದವು. ತನ್ನ ಸುತ್ತ ತಿರುಗುತ್ತ ಆನಂದವನ್ನು ಅದು ವ್ಯಕ್ತ ಪಡಿಸುತ್ತಿತ್ತು.



“ನಮ್ಮ ದನಕಾಯುವ ಹುಡುಗ ಕುದುರೆಯ ಮೇಲೆ ಕುಳಿತಿದ್ದಾನೆ.” ಕಾರ್ಲೋಸ ಹೇಳಿದನು. “ನಾವು ಹೊಸ ಮನೆ ಕಟ್ಟುವಾಗ ಅದು ಕಂಬಗಳನ್ನು ಎತ್ತಬಹುದು.” ರುಬೆನ ಹೇಳಿದ. “ಮತ್ತು ಹೊಲಗೆಲಸ ಮಾಡಬಹುದು.” ಕಾರ್ಲೋಸನ ಉತ್ತರ.



“ಸ್ವಲ್ಪ ನಿದಾನ!” ಮಾರಿಯಾ ಹೇಳಿದಳು. “ನಮ್ಮ ಈ ಚಿಕ್ಕ ಗೆಳತಿಗೆ ಬಹಳ ಕೆಲಸ ಹೇಳಬೇಡಿ.”

ಅವಳು ಫಿಲೋಮಿನಾಳ ಮೂಗನ್ನು ತಿಕ್ಕಿದಳು.



ಅವರು ಪರ್ವತವನ್ನು ದಾಟಿಬಂದರು.
ಅವರಿಗೆ ಸಮುದ್ರದಾಚೆಯ ಹಸಿರು
ಗುಡ್ಡಗಳು ಕಂಡವು.



ಸ್ಯಾನ ಗೇಬ್ರಿಯಲ್ ಮಿಶನದ ಪಾದ್ರಿ
ಬಂದು ಭೆಟ್ಟಿಯಾದರು.

“ನಾವು ಕಟ್ಟ ಕಡೆಗೆ ಮನೆ ಮುಟ್ಟಿದ್ದೇವೆ. “

ಫೆಲಿಪೆ ಫಿಲೋಮಿನಾದ ಕಿವಿಯಲ್ಲಿ ಗುಣುಗಿದನು. ಮತ್ತೇ ಫಿಲೋಮಿನಾ ತನ್ನ ಎತ್ತರದ ದನಿಯಲ್ಲಿ ಕೂಗಿತು.

“ಢೆಂಚೂ -ಢೆSSSSS - ಚೂ SSSSS !”



ಜೆನೆವೀವ್ವ ಗ್ರೆ ಅರ್ಕನ್ಸಾಸ್ ಪ್ರಾಂತದಲ್ಲಿ ಹುಟ್ಟಿದಳು. ಅರಿಝೋನಾ ಯುನಿವ್ವರ್ಸಿಟಿಯಿಂದ ಮಾಸ್ಟರ್ಸ ಡಿಗ್ರಿ ಪಡೆದ ನಂತರ ಶಿಕ್ಷಿಕೆಯಾದ ಅವಳು ಮಕ್ಕಳಿಗಾಗಿ ಪುಸ್ತಕಗಳನ್ನು ಬರೆಯತೊಡಗಿದಳು.

ಚಿತ್ರ ಕಲಾವಿದೆ ಯಾನ ಗ್ರಿಫಾಲ್ಕೊನಿ ನ್ಯೂಯಾರ್ಕದಲ್ಲಿ ಜನಿಸಿದಳು. ಅವಳು ಮಕ್ಕಳ ಪುಸ್ತಕಗಳಲ್ಲಿ ಚಿತ್ರಗಳನ್ನು ತೆಗೆದು ಪುಸ್ತಕಗಳ ಅಂದವನ್ನು ಹೆಚ್ಚಿಸಿದಳು. ಮೆಕ್ಸಿಕನ್ ಇತಿಹಾಸದಲ್ಲಿ ಅವಳಿಗೆ ಸಾಕಷ್ಟು ರುಚಿ ಇದೆ.